KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೧, ೨೦೦೬ (ಜೇಷ್ಠ ೧೧, ಶಕ ವರ್ಷ ೧೯೨೮) | ಸಂಚಿಕೆ ೨೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಕರ್ನಾಟಕ ಸರ್ಕಾರ**

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಸಣ್ಣ ನೀರಾವರಿ ಉಪ-ವಿಭಾಗ, ಅಫಜಲಪೂರ**

**ಕೈಪಿಡಿ-1** :- ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು.

ಸಣ್ಣ ನೀರಾವರಿ ಉಪ-ವಿಭಾಗ, ಅಫಜಲಪೂರವು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತದೆ. ಈ ಉಪ-ವಿಭಾಗದಡಿಯಲ್ಲಿ ದಿನಾಂಕ:01-04-2005ರ ಪ್ರಕಾರ ಒಟ್ಟು 33 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿವೆ ಇವುಗಳಿಂದ ಒಟ್ಟು..9209.40. ಹೆಕ್ಟೇರ ಭೂಮಿಗೆ ನೀರಾವರಿಯಾಗುವ ಅಚ್ಚುಕಟ್ಟು ಪ್ರದೇಶ ಹೊಂದಿದೆ.

ಈ ಉಪ-ವಿಭಾಗದ ಕಾರ್ಯವ್ಯಾಪ್ತಿಯು ಗುಲಬರ್ಗಾ ಜಿಲ್ಲೆಯ 2 ತಾಲೂಕಿನಲ್ಲಿನ 40 ಹೆಕ್ಟೇರಗಿಂತ ಅಧಿಕ 2000 ಹೆಕ್ಟೇರಗಿಂತ ಕಡಿಮೆ ಅಚ್ಚುಕಟ್ಟು ಬರುವ ಸಣ್ಣ ನೀರಾವರಿ ಕೆರೆ, ಜಿನಗು ಕೆರೆ, ಏತ ನೀರಾವರಿ ಯೋಜನೆ, ಅಣೆಕಟ್ಟು, ಬ್ಯಾರೇಜ ಹಾಗೂ ಬ್ಯಾರೇಜ ಒಳಗೊಂಡ ಸೇತುವೆಗಳ, ನಿರ್ಮಾಣ ಮತ್ತು ಅವುಗಳ ನಿರ್ವಹಣೆಗೊಂಡು ಕಾರ್ಯಭಾರ ಹೊಂದಿರುತ್ತದೆ.

ಗುಲಬರ್ಗಾ ಜಿಲ್ಲೆಯ ಅಫಜಲಪೂರ/ಆಳಂದ ತಾಲೂಕುಗಳು ಕರ್ನಾಟಕದ ಅತ್ಯಂತ ಹಿಂದುಳಿದ ತಾಲೂಕುಗಳಾಗಿದ್ದು ಪ್ರಾದೇಶಿಕ ಅಸಮತೋಲನೆಯು ಕೂಡ ಒಂದು ಪ್ರಮುಖ ಕಾರಣಯಾಗಿರುತ್ತದೆ. ಈ ಭಾಗದ ಶೇಕಡಾ 90 ರಷ್ಟು ರೈತರು ಪ್ರಮುಖವಾಗಿ ಮಳೆ ಮೇಲೆಯೇ ಅವಲಂಬಿತರಾಗಿದ್ದು,ಇತ್ತೀಚಿನ ವರ್ಷಗಳಲ್ಲಿ ಮಳೆ ಪ್ರಮಾಣ ಅತ್ಯಂತ ಕಡಿಮೆಗೊಂಡು ಪ್ರತಿ ವರ್ಷವು ಬರಗಾಲದ ಸಮಸ್ಯ ಎದುರಾಗುತ್ತಿದೆ. ದಿನಾಂಕ: 01-04-2004ರ ಪ್ರಕಾರ 31 ಸಣ್ಣ ನೀರಾವರಿ ಯೋಜನೆಗಳು ಅಸ್ತಿತ್ವದಲ್ಲಿದ್ದವು, ಇವುಗಳಿಂದ 122.52 ಹೆಕ್ಟೇರ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ಈ ಉಪ-ವಿಭಾಗವು ಅಫಜಲಪೂರ ಹಾಗೂ ಆಳಂದ ತಾಲೂಕಿಗೆ ಸಂಬಂಧಿಸಿದ್ದು, ಈ ತಾಲೂಕುಗಳಲ್ಲಿ ಬರುವ ಎಲ್ಲಾ ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ, ಉಸ್ತುವಾರಿ ಹಾಗೂ ನಿರ್ವಹಣೆಯನ್ನು ನೋಡಿಕೊಳ್ಳುತ್ತದೆ.

ಸಹಾಯಕ ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ಉಪ-ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ಇವರ ಕಛೇರಿಯಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಾರ್ಯನಿರ್ವಹಿಸುತ್ತಿರುತ್ತದೆ.

1) ಆಡಳಿತ ಶಾಖೆ.
2) ತಾಂತ್ರಿಕ ಶಾಖೆ.

**(1) ಆಡಳಿತ ಶಾಖೆ**:– ಸಹಾಯಕ ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ಉಪ–ವಿಭಾಗ, ಅಫಜಲಪೂರ ಕಛೇರಿಯಲ್ಲಿ ಮಂಜೂರಾಗಿರುವ 18 ಹುದ್ದೆಗಳ ಪೈಕಿ ಎಲ್ಲಾ ಅಧಿಕಾರಿ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ 'ಎ' 1 ನೌಕರರು, ವರ್ಗ 'ಬಿ' 4, ವರ್ಗ 'ಸಿ' ೨ ಮತ್ತು ವರ್ಗ 'ಡಿ' 4 ಸಂಖ್ಯೆಗಳಾಗಿರುತ್ತವೆ.

ಪ್ರಥಮ ದರ್ಜೆ ಸಹಾಯಕರು ಆಡಳಿತ ಶಾಖೆ ಮುಖ್ಯಸ್ಥರಾಗಿದ್ದು, ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಭವಿಷ್ಯ ನಿಧಿಗಳ ದಾಖಲೆಗಳನ್ನು ನಿರ್ವಹಿಸುವದು, ವಿಚಾರಣೆ, ವಿದ್ಯುತಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವದು, ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವದು.

ನಿರ್ವಹಿಸುವ ಸಂಕ್ಷಿಪ್ತ ಕೆಲಸದ ವಿವರವನ್ನು ಈ ಕೆಳಗೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾವಿವರಗಳು, ವಿದ್ಯುತಚ್ಛಕ್ತಿ ಮತ್ತು ದೂರವಾಣಿ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವುದು.
೨) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ ದೈನಂದಿನ ಪತ್ರಗಳನ್ನು ರವಾನಿಸುವುದು ಹಾಗೂ ಸ್ವೀಕರಿಸುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.
೩) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರದ ಬಗ್ಗೆ ಮುಂದಿನ ಕ್ರಮಕ್ಕಾಗಿ ಕಾರ್ಯನಿರ್ವಾಹಕ ಅಭಿಯಂತರವರಿಗೆ ವರದಿ ಸಲ್ಲಿಸುವದು ಇತ್ಯಾದಿ ಕೆಲಸವನ್ನು ನಿರ್ವಹಿಸುತ್ತದೆ.

(4) ಉಗ್ರಾಣ ಶಾಖೆಯ ಕಾರ್ಯಭಾರವನ್ನು ದ್ವಿತೀಯ ದರ್ಜೆ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ಈಗ ಸರ್ಕಾರದವತಿಯಿಂದ ಕಾಮಗಾರಿಗಾಗಿ ಯಾವುದೇ ಸಾಮಗ್ರಿಗಳನ್ನು ಖರೀದಿಸುತ್ತಿಲ್ಲವಾದ್ದರಿಂದ ಈ ಶಾಖೆಗೆ ಹೆಚ್ಚು ಮಹತ್ವ ಇರುವುದಿಲ್ಲ. ಅಲ್ಲದೇ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

**(4) ತಾಂತ್ರಿಕ ಶಾಖೆ**:– ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರು ಈ ಉಪ–ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯ ಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜನೀಯರರು ಮತ್ತು ಕಿರಿಯ ಇಂಜಿನೀಯರರು ಸಹಾಯಕರಿರುತ್ತಾರೆ. ಇವರ ಕಾರ್ಯ ವ್ಯಾಪ್ತಿ ಈ ಕೆಳಗಿನಂತಿರುತ್ತದೆ.

1) ಕಾಮಗಾರಿಗಳ ವಾರ್ಷಿಕ ನಿರ್ವಹಣೆ.
೨) ಕಾಮಗಾರಿಗಳ ಸರ್ವೆ ಮತ್ತು ಅಂದಾಜು ಪತ್ರಿಕೆ ತಯಾರಿಸುವದು.
೩) ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ನಿರ್ವಹಿಸುವದು.
4) ಎಂ.ಎಂ.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿಯ ವರದಿ ತಯಾರಿಸುವುದು ಹಾಗೂ ಹಾಜರಾಗುವುದು.
5) ವಿಧಾನ ಸಭಾ ಮತ್ತು ವಿಧಾನ ಪರಿಷತ್ ಪ್ರಶ್ನೆಗಳಿಗೆ ಉತ್ತರಿಸುವದು.

**ಕೈಪಿಡಿ–2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ**.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕಾರ್ಯಭಾರ ಈ ಕೆಳಗಿನಂತಿದೆ.

1) ಅಂದಾಜು ಪತ್ರಿಕೆ ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವದು.
೨) ಎಂ.ಎಂ.ಆರ್. ಸಭೆ ನಡೆಸಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿ ಪರಿಶೀಲನೆ ಮಾಡುವುದು.
೩) ವಿಧಾನ ಸಭೆ ಮತ್ತು ವಿಧಾನ ಪರಿಷತ್ ನಡುವಳಿಯಲ್ಲಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.
4) ಸರ್ಕಾರದ ನಿಗದಿತ ಸಭೆಗಳಿಗೆ ಹಾಜರಾಗುವುದು ಹಾಗೂ ಚರ್ಚಿಸಿದ ಅಂಶಗಳ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವುದು.
5) ದೈನಂದಿನ ಆಡಳಿತವನ್ನು ನಡೆಸುವದು.
6) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ಹಾಗೂ ಗುಣಮಟ್ಟವನ್ನು ತಪಾಸಣೆ ಮಾಡುವುದು.
7) ಉಪ–ವಿಭಾಗ' ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮ ಪ್ರಕಾರ ಕೋರಿಕೆ ಬಂದಲ್ಲಿ ಸಾರ್ವಜನಿಕರಿಗೆ ನೀಡುವುದು.
೮) ಕಛೇರಿಯ ಉಳಿದ ಅಧಿಕಾರಿಗಳ ಮತ್ತು ಸಿಬ್ಬಂದಿಗಳಿಗೆ ಪ್ರತ್ಯೇಕವಾಗಿ ಸ್ವತಂತ್ರ ಅಧಿಕಾರವನ್ನು ನೀಡಿರುವುದಿಲ್ಲ. ಕಾರಣ ಅಧಿಕಾರಿಗಳು ಮತ್ತು ಸಿಬ್ಬಂದಿಗಳು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರಿಗೆ ಕರ್ತವ್ಯ ನಿಭಾಯಿಸಲು ಸಹಾಯ ಮಾಡುವುದು ಹಾಗೂ ಸಹಕರಿಸುವುದು.

**ಕೈಪಿಡಿ–3**:– ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.

ಇಲಾಖೆಯ ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

1) ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
2) ಕರ್ನಾಟಕ ಪಾರದರ್ಶಕ ನಿಯಮ 2000
3) ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವದು.
4) ಭೂಸ್ವಾಧೀನ ಕಾಯ್ದೆ.
5) ಉಗ್ರಾಣ ಕೈಪಿಡಿ
6) ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ

1) ಕರ್ನಾಟಕ ನೀರಾವರಿ ಕಾಯ್ದೆ,
2) ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವದು) ನಿಯಮ 1965
3) ನೀರಾವರಿ ಕೈಪಿಡಿ 1974.

ಇವುಗಳನ್ನು ಅನುಸರಿಸಲಾಗುತ್ತಿದೆ.

ವಿಭಾಗ ಕಛೇರಿಯಲ್ಲಿ ಮಂಜೂರಾದ ಒಪ್ಪಂದದ ಪತ್ರದನ್ವಯ ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಸಲು ಮಾರ್ಕಔಟ ನೀಡಿ ಕೆಲಸ ಚಾಲನೆ ಮಾಡಲಾಗುತ್ತದೆ.. ಸಂಬಂಧಿಸಿದ ಸಹಾಯಕ/ ಕಿರಿಯ ಅಭಿಯಂತರರು, ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಅಭಿಯಂತರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಇಂಜಿನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಅಭಿಯಂತರರು ಮತ್ತು ಅಧೀಕ್ಷಕ ಅಭಿಯಂತರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ವರ್ಷದಲ್ಲಿ ಒಂದು ಸಲ ಮುಖ್ಯ ಅಭಿಯಂತರರ ಕಛೇರಿ ಹಾಗೂ ಅಧೀಕ್ಷಕ ಅಭಿಯಂತರರ ಮತ್ತು ಕಾರ್ಯನಿರ್ವಾಹಕ ಅಭಿಯಂತರರು ಕಛೇರಿಯಿಂದ ಉಪ–ವಿಭಾಗದ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರೂ ಕೂಡ ನಿವೇಶನವನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4**:– ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸ ಬೇಕಾದ ಸೂತ್ರಗಳು.

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಪ್ರಾಧಿಕಾರ ಪ್ರತ್ಯಾಯೋಜನೆ, ಸರ್ಕಾರಿ ಆದೇಶ ಸಂ: ಪಿಡಬ್ಲ್ಯೂ–1 ಎಫ್‌ಸಿಆರ್–93 ಬೆಂಗಳೂರು ದಿನಾಂಕ 15–12–1994.

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರಕಾರಿ ಆದೇಶ ಸಂ. ಎಫ್‌ಡಿ–1 ಟಿಎಫ್‌ಸಿ 2001 ಬೆಂಗಳೂರು ದಿನಾಂಕ 02–02–2001.

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಆರ್ಥಿಕ ಸಂಹಿತೆ.

**ಕೈಪಿಡಿ–5**:– ಇಲಾಖೆಯ ಅಧೀನದಲ್ಲಿರುವ ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ, ಕಛೇರಿ ಕೈಪಿಡಿ, ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು.

- ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
- ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು.
- ಕರ್ನಾಟಕ ಆರ್ಥಿಕ ಸಂಹಿತೆ.
- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2
- ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ – 2000.
- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವುದು.
- ಭೂಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ.
- ಮಧ್ಯಸ್ಥಿಕೆ ಕಾಯ್ದೆ. 1996 ಮತ್ತು 1940.
- ಕರ್ನಾಟಕ ನೀರಾವರಿ ಕಾಯ್ದೆ 1965.
- ಕರ್ನಾಟಕ ನೀರಾವರಿ (ನೀರಿನ ಕರ ವಿಧಿಸುವುದು) ನಿಯಮ 1965.
- ನೀರಾವರಿ ಕೈಪಿಡಿ 1974.
- ಐ.ಎಸ್. ಕೋಡ್ಸ್.
- ಏತ ನೀರಾವರಿ ಯೋಜನೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.
- ಸಣ್ಣ ನೀರಾವರಿ ಕೆರೆಗಳ ಅಂದಾಜನ್ನು ತಯಾರಿಸಲು ಮಾರ್ಗದರ್ಶನ ಕೈಪಿಡಿ.

- ಸಾದಿಲ್ವಾರು ವೆಚ್ಚದ ಕೈಪಿಡಿ.
- ಕರ್ನಾಟಕ ಖಜಾನೆ ಸಂಹಿತೆ.
- ಚಾಲ್ತಿ ದರಪಟ್ಟಿ.
- ಬಜೆಟ್ ಕೈಪಿಡಿ.
- ನೀರಾವರಿಗೆ ಸಂಬಂಧಪಟ್ಟಂತೆ ಪುಸ್ತಕಗಳು.

**ದಾಖಲೆಗಳು:–**

ಉಪ–ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ.

| | |
|---|---|
| 1) | ಹಾಜರಾತಿ ಪುಸ್ತಕ. |
| 2) | ಪತ್ರಾಂಕಿತ ಮತ್ತು ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ. |
| 3) | ಸಂಘಟನಾ ಫಲಕ. |
| 4) | ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಖ್ತೆ: |
| 5) | ಕೆಲಸ ವಿತರಣಾ ತಖ್ತೆ: |
| 6) | ವೇತನ ಬಡ್ತಿಯ ನಿಗಾ ವಹಿ. |
| 7) | ವೇತನ ಬಡ್ತಿಯ ಮಂಜೂರಾತಿ ವಹಿ. |
| 8) | ಇನ್ ಕಂಬೆನ್ಸಿ ವಹಿ. |
| 9) | ರಹಸ್ಯ ವರದಿಗಳ ವಹಿ. |
| 10) | ಆಸ್ತಿ ಮತ್ತು ದಾಯಿತ್ವ ತಖ್ತೆ: ವಹಿ. |
| 11) | ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ. |
| 12) | ನೌಕರರ ಸೇವಾ ವಹಿಗಳ ಪಟ್ಟಿ ಹಾಗೂ ಸೇವಾ ವಹಿಗಳ ನಿಗಾ ವಹಿ. |
| 13) | ಸೇವಾ ವಹಿ. |
| 14) | ತಾತ್ಕಾಲಿಕ ಆಡಳಿತ ವಹಿ. |
| 15) | ಇಲಾಖಾ ಪರೀಕ್ಷೆಗಳ ನಿಗಾ ವಹಿ. |
| 16) | ದೂರವಾಣಿ, ಟ್ರಂಕ್ ಕರೆಗಳ ವಹಿ. |
| 17) | ಪರಿವೀಕ್ಷಣಾ ಟಿಪ್ಪಣಿ ಪುಸ್ತಕ. |
| 18) | ಕಛೇರಿ ನೌಕರರ ಮನೆಗಳ ವಿಳಾಸ. |
| 19) | ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ. |
| 20) | ಕಡತಗಳ ವಹಿ ಮತ್ತು ವೈಯಕ್ತಿಕ ವಹಿ. |
| 21) | ಪ್ರತಿ ಮಾಹೆಗಳ ಬಾಕಿ ಪಟ್ಟಿ. |
| 22) | ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಖ್ತೆ:. |
| 23) | ಸಾಮಾನ್ಯ ಸ್ವೀಕೃತಿ ವಹಿ. |
| 24) | ರವಾನೆ ವಹಿ. |
| 25) | ಏಪ್ರೀಲ್ ಒಂದರಿಂದ ಬೇರೆ ಬೇರೆ ಕಛೇರಿಗಳಿಂದ ಸ್ವೀಕೃತಿಯಾದ ಮತ್ತು ರವಾನಿಸಲಾದ ಪತ್ರಗಳ ವಿವರಗಳ ತಖ್ತೆ. |
| 26) | ಶುದ್ಧ ಪತ್ರಿ ತಖ್ತೆ: |
| 27) | ಬೆರಳಚ್ಚುಗಾರರ ದಿನವಹಿ. |
| 28) | ಸ್ಥಳೀಯ ವಿತರಣಾ ರವಾನೆ. |
| 29) | ಕಛೇರಿ ಆದೇಶ ಪುಸ್ತಕ. |
| 30) | ಗೃಹ ನಿರ್ಮಾಣ ಮತ್ತು ವಾಹನ ಮುಂಗಡ ಮಂಜೂರಾತಿ ವಹಿ. |
| 31) | ವೈದ್ಯಕೀಯ ವೆಚ್ಚ ಮರು ಪಾವತಿ ಕಡತ. |
| 32) | ಕರ್ನಾಟಕ ಸರ್ಕಾರ ಸಾಮೂಹಿಕ ವಿಮಾ ಯೋಜನೆ ವರ್ಗಾವಾರು ವಹಿ. |
| 33) | ಕಛೇರಿ ಕೈಪಿಡಿಯಲ್ಲಿ ನಿಗದಿಪಡಿಸಿದಂತೆ ಇತರೆ ವಹಿಗಳು. |
| 34) | ಸಾಮಾನ್ಯ ಭವಿಷ್ಯ ನಿಧಿಯ ಪಾಸ್ ಪುಸ್ತಕ. |
| 35) | ಸಾಮಾನ್ಯ ನಗದು ಪುಸ್ತಕ. |

| | |
|---|---|
| 36) | ಪಾವತಿ ವಹಿ. |
| 37) | ನಗಧಿಕರಣ ವಹಿ. |
| 38) | ವೇತನ ಬಟಾವಡೆ ವಹಿ. |
| 39) | ಪಾವತಿಯಾಗದ ವೇತನ ವಹಿ. |
| 40) | ಪ್ರಯಾಣ ಭತ್ಯೆ ನಿಗಾ ವಹಿ. |
| 41) | ಪ್ರಯಾಣ ಭತ್ಯೆ ಬಟಾವಡೆ ವಹಿ. |
| 42) | ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನಾ ವಹಿ. |
| 43) | ಸಾದಿಲ್ವಾರು ವೆಚ್ಚ ವಹಿ, ವೋಚರ್‌ಗಳ ಸಹಿತ. |
| 44) | ವಿಶೇಷ ವಸೂಲಾತಿಗಳ ವಹಿ. |
| 45) | ಆಡಿಟ್ ನೋಟ್, ರಿಜಾಯಿಚಿಡರ್, ಪರಿಶೀಲನಾ ಟಿಪ್ಪಣಿಗಳ ನಿಗಾ ವಹಿ. |
| 46) | ಮೇಲಾಧಿಕಾರಿಗಳ ಅನಿರೀಕ್ಷಿತಾ ತಪಾಸಣಾ ಟಿಪ್ಪಣಿ. |
| 47) | ಅಧಿಕಾರಿಗಳ ಹಾಗೂ ಸಿಬ್ಬಂದಿಗಳ ಮಾಸಿಕ ದಿನಚರಿ. |

**ತಾಂತ್ರಿಕ ಶಾಖೆ:**

1. ದರ ಸೂಚಿ.
2. ಎಂ.ಎಂ.ಆರ್. ಪುಸ್ತಕ.
3. ಹೊಸಕೆರೆ ಮತ್ತು ಜಲಾಶಯಗಳ ವಹಿ.
4. ಆಯವ್ಯಯ ಕಾಮಗಾರಿಗಳ ವಹಿ.
5. ಕೆರೆಗಳ ವಹಿ.
6. ದಾಖಲಾತಿಗಳು.
7. ಮೇಲಾಧಿಕಾರಿಗಳಂದ ಮಂಜೂರಾದ ಅಂದಾಜುಗಳ ಪಟ್ಟಿ.
8. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ.

**ಕೈಪಿಡಿ-6:-** ಇಲಾಖೆಯ ಅಧೀನದಲ್ಲಿರುವ ದಾಖಲೆಗಳ ವರ್ಗೀಕರಣದ ತಖ್ತೆ:

**ತಾಂತ್ರಿಕ ಶಾಖೆ:**

- ❖ ಕಾರ್ಯನಿರ್ವಾಹಕ ಅಭಿಯಂತರರು, ಅಧೀಕ್ಷಕ ಅಭಿಯಂತರರು ಮತ್ತು ಮುಖ್ಯ ಅಭಿಯಂತರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪಟ್ಟಿಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
- ❖ ಪ್ರಗತಿಯ ವರದಿಗಳು.
- ❖ ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

**ಆಡಳಿತ ಶಾಖೆ:**

- ❖ ಸಾಮಾನ್ಯ ಸ್ವೀಕೃತಿ ವಹಿ.
- ❖ ಸ್ಟಾಂಪು ವಹಿ.
- ❖ ಹಾಜರಿ ಪುಸ್ತಕ
- ❖ ದಾಖಲು ವಹಿ
- ❖ ಪೀಠೋಪಕರಣಗಳು ಮತ್ತು ಇತರೆ ಸಾಮಗ್ರಿಗಳ ವಹಿ
- ❖ ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರ ಪ್ರಶ್ನೆಗಳಗೆ ಉತ್ತರ ಕಳುಹಿಸುವ ಚಲನವಲನ ವಹಿ.
- ❖ ಗೃಹ ನಿರ್ಮಾಣ ಮುಂಗಡ, ವಾಹನ ಮುಂಗಡ ಚಲನವಲನ ವಹಿ
- ❖ ಕಛೇರಿ ಆದೇಶ ವಹಿ
- ❖ ಶಿಸ್ತು ಪ್ರಕರಣ ನಿಗಾ ವಹಿ

**ಕೈಪಿಡಿ-7:-** ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನು ಇರುವುದಿಲ್ಲ.

**ಕೈಪಿಡಿ-8:-** ಇಲಾಖೆಯಲ್ಲಿರುವ ನಿಗಮ/ಪರಿಷತ್ತು/ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

ಯಾವುದೂ ಇರುವುದಿಲ್ಲ.

**ಕೈಪಿಡಿ-9:-** ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ.

ಈ ಇಲಾಖೆಯಲ್ಲಿಯ ಅಧಿಕಾರದ ಬಗ್ಗೆ ಕೈಪಿಡಿ-2 ರಲ್ಲಿ ಈಗಾಗಲೇ ತಿಳಸಲಾಗಿದೆ.

ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.

| ಕ್ರ. ಸಂ. | ಹುದ್ದೆ ಮತ್ತು ಹೆಸರು. |
|---|---|
| 1) | **ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು-1** |

(1) ಶ್ರೀ. ಸಿ. ಎಚ್. ಕೋಲ್ಕರ್

2) **ಸಹಾಯಕ ಇಂಜಿನೀಯರ್-4**

1) ಶ್ರೀ. ನಾರಾಯಣ ಎಂ. ಭಗವಂತಿ.
2) ಶ್ರೀ. ಸಿದ್ರಾಮ. ಬಿ. ಅಜಗೊಂಡ.
3) ಶ್ರೀ. ಚಂದ್ರಕಾಂತ. ಎಸ್. ಕರೂರ.
4) ಶ್ರೀ. ಚರಸಿಂಗ್. ಬಿ. ಚವ್ಹಾಣ.

3) **ಕಿರಿಯ ಅಭಿಯಂತರರು-3**

1) ಶ್ರೀ. ಶ್ರೀಪಾದ. ಎಲ್. ಹಾವನೂರ
2) ಶ್ರೀ. ಕಂಠೆಪ್ಪಾ. ಎಸ್. ಚೆಂಗಟಿ.
3) ಶ್ರೀ. ಚಂದ್ರಕಾಂತ. ಎಸ್. ಸಿಂಗೋಡಿ.

4) **ಪ್ರಥಮ ದರ್ಜೆ ಸಹಾಯಕರು-1.**

1) ಶ್ರೀ. ಮಜರ ಅಲಿ

5) **ದ್ವಿತೀಯ ದರ್ಜೆ ಸಹಾಯಕರು-2**

1) ಶ್ರೀ. ಹಣಮಂತರಾವ
2) ಶ್ರೀ. ಸಂಗಪ್ಪಾ. ಎಸ್. ಕುಂಬಾರ.

6) **ಪ್ರಾರೂಪಕರಾರು-1**

1) ಶ್ರೀ. ಗೌಳಿ ಗೋವಿಂದ.

7) **ಪ್ರ.ದ.ಭೂ. ಮಾಪಕರು-1**

1) ಶ್ರೀ. ಅಪ್ಪರಾವ. ನಿಪ್ಪಾಣಿ.

8) **ಬೆರಳಚ್ಚುಗಾರರು-1.**

1) ಶ್ರೀ. ಮುಜೀಬರ ರೆಹೆಮಾನ್

9) **ವಾಹನ ಚಾಲಕ-1**

1) ಶ್ರೀ. ಬಹಾದ್ದೂರ್ ಸಿಂಗ್

10) **ಜವಾನರು-2.**

1) ಶ್ರೀ. ಎಮ್ ಡಿ. ಜಾಹೇದ್
2) ಶ್ರೀಮತಿ ಸಿದ್ದಮ್ಮಾ.

11) **ಕಾವಲುಗಾರ-1**

1) ಶ್ರಿ. ಲಕ್ಷ್ಮಣ .ಎಸ್ .

**ಕೈಪಿಡಿ-10**

ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ವೇತನ/ ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ಉಳದವರ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ. ಸಂ. | ಹುದ್ದೆ ಮತ್ತು ಹೆಸರು | ವೇತನ ಶ್ರೇಣಿ. | ವೇತನ ಮತ್ತು ಭತ್ಯಗಳು. |
|---|---|---|---|
| 1) | **ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು-1** | | |
| | ಶ್ರೀ. ಸಿ.ಎಚ್. ಕೋಲ್ಕರ್ | 7400-13120. | 20,720.00 |
| 2) | **ಸಹಾಯಕ ಇಂಜನೀಯರರು-4** | | |
| | 1) ಶ್ರೀ. ನಾರಾಯಣ ಎಂ. ಭಗವಂತಿ. | 6300-11840 | 13021.00 |
| | 2) ಶ್ರೀ. ಸಿದ್ರಾಮ. ಬಿ. ಅಜಗೊಂಡ | 6000-11200 | 11353.00 |
| | 3) ಶ್ರೀ. ಚಂದ್ರಕಾಂತ. ಎಸ್. ಕರೂರ. | 6000-11200 | 11025.00 |
| | 4) ಶ್ರೀ. ಚರಸಿಂಗ್. ಬಿ. ಚವ್ಹಾಣ. | 6000-11200 | 10500.00 |
| 3) | **ಕಿರಿಯ ಇಂಜನೀಯರ-3** | | |
| | 1) ಶ್ರೀ. ಶ್ರೀಪಾದ .ಎಲ್.ಹಾವನೂರ | 4575-8400 | 9781.00 |
| | 2) ಶ್ರೀ. ಕಂಠೆಪ್ಪಾ .ಎಸ್. ಚೆಂಗಟಿ | 4575-8400 | 9344.00 |
| | 3) ಶ್ರೀ. ಚಂದ್ರಕಾಂತ. ಸಿಂಗೋಡಿ | 4575-8400 | 8957.00 |

| ಕ್ರ. ಸಂ. | ಹುದ್ದೆ ಮತ್ತು ಹೆಸರು | ವೇತನ ಶ್ರೇಣಿ. | ವೇತನ ಮತ್ತು ಭತ್ಯಗಳು. |
|---|---|---|---|
| 4) | **ಪ್ರಾರೂಪಕಾರರು-1.** | | |
| | 1) ಶ್ರೀ. ಗೌಳ ಗೋವಿಂದ | 4150-7800 | 11575.00 |
| 5) | **ಪ್ರ.ದ. ಸಹಾಯಕರು-1** | | |
| | 1) ಶ್ರೀ. ಮಜರ ಅಲಿ | 3850-7050 | 13150.00 |
| 6) | **ಪ್ರ.ದ.ಭೂ. ಮಾಪಕರು-1** | | |
| | 1) ಶ್ರೀ. ಅಪ್ಪರಾವ . ನಿಪ್ಪಾಣಿ | 3850-7050 | 11150.00 |
| 7) | **ದ್ವಿ.ದ.ಸಹಾಯಕರು-2** | | |
| | 1) ಶ್ರೀ. ಟಿ. ಹಣಮಂತರಾವ | 3850-7050 | 9871.00 |
| | 2) ಶ್ರೀ. ಸಂಗಪ್ಪಾ . ಎಸ್. ಕುಂಬಾರ. | 3300-6300 | 6588.00 |
| 8) | **ಬೆರಳಚ್ಚುಗಾರರು-1** | | |
| | 1) ಶ್ರೀ. ಮಜಬೂರ ರೆಹೆಮಾನ್ | 3850-7050 | 9871.00 |
| 9) | **ವಾಹನ ಚಾಲಕ-1** | | |
| | 1) ಶ್ರೀ. ಬಹಾದ್ದೂರ್ ಸಿಂಗ್ | 3000-5450 | 6141.00 |
| 10) | **ಜವಾನರು-2** | | |
| | 1) ಶ್ರೀ. ಮಹ್ಮದ್ ಜಾಹಿದ್ | 2500-3850 | 4783.00 |
| | 2) ಶ್ರೀಮತಿ. ಸಿದ್ದಮ್ಮಾ | 2500-3850 | 5264.00 |
| 11) | **ಕಾವಲುಗಾರ-1** | | |
| | 1) ಶ್ರೀ. ಲಕ್ಷ್ಮಣ . ಎಸ್. | 2500-3850 | 4783.00 |

**ಕೈಪಿಡಿ-11:-** ಇಲಾಖೆಯಲ್ಲಿರುವ ವಲಯ/ವಿಭಾಗಗಳಿಗೆ ನೀಡುತ್ತಿರುವ ಆಯವ್ಯಯದ ವಿವರಗಳು.

ಯೋಜನೆಗಳ ವಿವರ ಮತ್ತು ವೆಚ್ಚ ಮತ್ತು ಪ್ರಸ್ತಾವಿಸಿದ ಅನುದಾನ ಮತ್ತು ಅದನ್ನು ಬಿಡುಗಡೆ ಮಾಡುವ ಬಗ್ಗೆ ವಿವರಗಳನ್ನು ಪ್ರತ್ಯೇಕವಾಗಿ ಲಗತ್ತಿಸಲಾಗಿದೆ.

**ಕೈಪಿಡಿ-12:-** ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ-13:-** ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ.

ಯಾವುದು ಇಲ್ಲ.

**ಕೈಪಿಡಿ-14:-** ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್ ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ.

ಇಲಾಖೆಯಲ್ಲಿ ವೆಬ್ ಸೈಟ್ ಯಾವುದೂ ಇಲ್ಲ.

**ಕೈಪಿಡಿ-15:-** ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ.

ಸಾರ್ವಜನಿಕರು ಸಹಾಯಕ ಕಾರ್ಯಪಾಲಕ ಇಂಜನೀಯರ, ಸಣ್ಣ ನೀರಾವರಿ ಉಪ-ವಿಭಾಗ, ಅಫಜಲಪೂರ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಸಿ.ಎಚ್. ಕೋಲ್ಕರ್ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ: 08470282046

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ-16:-** ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರ ವಿವರಗಳು.
ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ:

ಸಾರ್ವಜನಿಕರು ಸಹಾಯಕ ಕಾರ್ಯಪಾಲಕ ಇಂಜಿನೀಯರ, ಸಣ್ಣ ನೀರಾವರಿ ಉಪ-ವಿಭಾಗ, ಅಫಜಲಪೂರ. ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಸಿ.ಎಚ್. ಕೋಲ್ಕರ್ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

**ಕೈಪಿಡಿ-17:-** ಇತರೆ ವಿವರಗಳು.

**ಶ್ರೀ. ಸಿ. ಎಚ್. ಕೋಲ್ಕರ್**
ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ಉಪ-ವಿಭಾಗ, ಅಫಜಲಪೂರ.

ಪಿ.ಆರ್. 858

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯದ ನಡವಳಿಗಳು

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ವಿವಿಧ ರಸ್ತೆಗಳಲ್ಲಿ ಅಧಿಕ ಭಾರ ಹೊತ್ತು ಸಾಗುವ ಸರಕು ಸಾಗಾಣೆ ವಾಹನಗಳ ಸಂಚಾರ ನಿರ್ಬಂಧಿಸುವ ಬಗ್ಗೆ.

**ಉಲ್ಲೇಖ:**
1. ಶ್ರೀ ಎಸ್.ಎಲ್. ಧರ್ಮೇಗೌಡ, ಶಾಸಕರು, ಬೀರೂರು ಕ್ಷೇತ್ರ ಇವರು ಈ ಕಾರ್ಯಾಲಯಕ್ಕೆ ಗ್ರಾಮಸ್ಥರ ಮನವಿಗಳೊಂದಿಗೆ ಸಲ್ಲಿಸಿರುವ ಮನವಿ ದಿನಾಂಕ: 13.2.2006.
2. ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಇವರು ಈ ಕಾರ್ಯಾಲಯಕ್ಕೆ ಬರೆದಿರುವ ಪತ್ರದ ಸಂಖ್ಯೆ 71/ಸಿಬಿ/ಮಿಶ್ರ-07/06 ದಿನಾಂಕ: 20.2.2006.
3. ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರ, ಸಚಿವಾಲಯ, ವಿಕಾಸ ಸೌಧ, ಬೆಂಗಳೂರು ಇವರ ಪತ್ರದ ಸಂ: ಅಸಪ/ಲೋ/ಇ/178 ಸಿಕ್ಯೂಎಸ್ 05 ದಿನಾಂಕ: 28.2.2006.

**ಪ್ರಸ್ತಾವನೆ:**

1. ಶ್ರೀ ಎಸ್.ಎಲ್. ಧರ್ಮೇಗೌಡ, ಶಾಸಕರು, ಬೀರೂರು ಕ್ಷೇತ್ರ ಇವರು ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರದಲ್ಲಿ ಅವರ ಮತಕ್ಷೇತ್ರ ವ್ಯಾಪ್ತಿಯ ತಿಗಡ ಗ್ರಾಮ ಪಂಚಾಯಿತಿಯ ತಣಿಗೆ ಬೈಲು ಗ್ರಾಮದಲ್ಲಿ ಪಂಚಾಯಿತಿ ರಸ್ತೆಗೆ ಹೊಂದಿಕೊಂಡಂತೆ, ತರೀಕೆರೆಯಿಂದ ತಣಿಗೆ ಬೈಲಿಗೆ ಓಡಾಡುವ ಪಿ.ಡಬ್ಲ್ಯೂ.ಡಿ. ರಸ್ತೆ ಇದ್ದು, ತಣಿಗೆ ಬೈಲಿನಿಂದ ಅದಿರು ಪುಡಿ ಸಾಗಿಸುವ ಲಾರಿಗಳು ಟನ್ನೇಜ್‌ಗಿಂತ ಹೆಚ್ಚಿನ ಲೋಡ್ ಹಾಕಿ ಅತಿ ವೇಗದಲ್ಲಿ ಅದಿರು ಸಾಗಿಸುತ್ತಿರುವುದರಿಂದ ಈ ರಸ್ತೆ ಬದಿಯ ಅನೇಕ ಬಡವರ ಮನೆಗಳು ಸಾಗಾಟದ ರಭಸಕ್ಕೆ ಅಲುಗಾಡಿ, ಬಿರುಕು ಬಿಟ್ಟು ಅಪಾಯ ಸಂಭವಿಸುತ್ತಿದೆಯೆಂದೂ, ಆದ್ದರಿಂದ ಈ ಭಾಗದಲ್ಲಿ ಸಂಚರಿಸುವ ಅದಿರು ಪುಡಿ ತುಂಬಿ, ಅಧಿಕ ಭಾರ ಹೊತ್ತ ಲಾರಿಗಳ ಸಂಚಾರವನ್ನು ಸ್ಥಗಿತಗೊಳಿಸಬೇಕೆಂದೂ, ಹಾನಿಯಾಗಿರುವ ಮನೆಗಳವರಿಗೆ ಪರಿಹಾರ ನೀಡಬೇಕಾಗಿ ಕೋರಿರುತ್ತಾರೆ.

2. ಪೊಲೀಸ್ ಅಧೀಕ್ಷಕರವರು, ಚಿಕ್ಕಮಗಳೂರುರವರು ವರದಿ ಸಲ್ಲಿಸಿ, ತಣಿಗೆಬೈಲು ತರೀಕೆರೆ ಮಾರ್ಗವಾಗಿ ಅದಿರು ತುಂಬಿದ ಲಾರಿಗಳು ಸಂಚರಿಸುವುದರಿಂದ ತಣಿಗೆ ಬೈಲು ಗ್ರಾಮದ ರಸ್ತೆ ಬದಿಯಲ್ಲಿನ ಬಡವರ ವಾಸದ ಮನೆಗಳಿಗೆ ಹಾನಿಯಾಗುವ ಸಾಧ್ಯತೆ ಹೆಚ್ಚಿದ್ದು, ಪ್ರಸ್ತುತ ಕೆಲವು ಮನೆಗಳಿಗೆ ಹಾನಿ ಸಂಭವಿಸಿರುತ್ತೆಂದು, ಇವರುಗಳು ಪರಿಹಾರ ನೀಡಬೇಕೆಂದು ಕೋರಿರುತ್ತಾರೆಂದು ದಿನಾಂಕ: 20.2.2006ರ ಪತ್ರದಲ್ಲಿ ವಿವರಿಸಿ, ಅದಿರು ತುಂಬಿದ (ವಾಹನಗಳ) ಲಾರಿಗಳ ಸಂಚಾರವನ್ನು ಈ ರಸ್ತೆಯಲ್ಲಿ ನಿಷೇಧಿಸಬೇಕೆಂದು ಕೋರಿರುತ್ತಾರೆ.

3. ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಕಾಸ ಸೌಧ, ಬೆಂಗಳೂರು ಇವರ ಪತ್ರ ಅಸಪ ಸಂಖ್ಯೆ ಲೋ.ಇ. 178/ಸಿಕ್ಯೂಎಸ್ 05 ದಿನಾಂಕ: 28.2.2006 ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ ರಸ್ತೆಗಳ ಮೇಲೆ ಸರಕು ಸಾಗಾಣೆ ವಾಹನಗಳಲ್ಲಿ ಅಧಿಕ ಭಾರಕೊಂಡು ಹೋಗುತ್ತಿರುವುದರಿಂದ ಸಾರ್ವಜನಿಕ ರಸ್ತೆಗಳು ಹಾಳಾಗುತ್ತಿದ್ದು, ರಸ್ತೆಗಳಲ್ಲಿ ವಾಹನಗಳು ಸಂಚರಿಸಲು ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದು, ವಿಧಾನ ಸಭೆ, ವಿಧಾನ ಪರಿಷತ್‌ಗಳಲ್ಲಿ ಚರ್ಚೆಯಾಗಿರುತ್ತದೆಯೆಂದು, ಈ ಕುರಿತು ದಿನಾಂಕ: 17.2.2006 ರಂದು ಲೋಕೋಪಯೋಗಿ ಇಲಾಖೆ ರಸ್ತೆಗಳಲ್ಲಿ ಸರಕು ಸಾಗಾಣೆ ವಾಹನಗಳಲ್ಲಿ ಅಧಿಕ ಭಾರಕೊಂಡು ಹೋಗುವುದನ್ನು ನಿರ್ಬಂಧಿಸಲು ಆದೇಶಿಸಿರುತ್ತಾರೆ.

ಮೇಲೆ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕು ತಣಿಗೆಬೈಲು-ತರೀಕೆರೆ ಮಾರ್ಗವಾಗಿ ಸಂಚರಿಸುವ ಭಾರೀ ಸರಕು ಸಾಗಾಣೆ ವಾಹನಗಳ ಸಂಚಾರದಿಂದ ಉಂಟಾಗಿರುವ ರಸ್ತೆ ಹಾಗೂ ಸೇತುವೆಗಳ ಹಾನಿಯನ್ನು ತಡೆಗಟ್ಟಲು ಹಾಗೂ ಮುಂದಾಗಬಹುದಾದ ಅಪಘಾತಗಳು ಹಾಗೂ ಇನ್ನಷ್ಟು ರಸ್ತೆ ಮತ್ತು ಸೇತುವೆಗಳು, ವಾಸದ ಮನೆಗಳ ಹಾನಿ ಮುಂತಾದ ಸಂಚಾರ ಅಸ್ತವ್ಯಸ್ತ ಇವುಗಳನ್ನು ತಪ್ಪಿಸುವ ಸಲುವಾಗಿ ಮೇಲ್ಕಂಡ ರಸ್ತೆಗಳಲ್ಲಿ 15,000/- ಕೆ.ಜಿ.ಗಳಿಗಿಂತಲೂ ಹೆಚ್ಚಿನ ಭಾರ ಹೊತ್ತ ಸರಕು ವಾಹನಗಳ ಸಂಚಾರವನ್ನು ನಿಷೇಧಿಸಲು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ ಸಂಖ್ಯೆ ಜೆ1 ಎಂಎಜಿ ಸಿಆರ್ 523/2004-05, ದಿನಾಂಕ: 20ನೇ ಮಾರ್ಚ್ 2006

ಶ್ರೀ ಹರ್ಷಗುಪ್ತಾ, ಭಾ.ಆ.ಸೇ., ಜಿಲ್ಲಾ ದಂಡಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕೇಂದ್ರ ಮೋಟಾರು ವಾಹನಗಳ ಕಾಯಿದೆ 1988ರ ಸೆಕ್ಷನ್ 115 ಹಾಗೂ ಕರ್ನಾಟಕ ಮೋಟಾರು ವಾಹನಗಳ ನಿಯಮಾವಳಿಗಳು 1989ರ ನಿಯಮ 221(ಎ)(5)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಚಿಕ್ಕಮಗಳೂರು ಜಿಲ್ಲೆಯ ತಣಿಗೆಬೈಲು-ತರೀಕೆರೆ ಈ ರಸ್ತೆಯಲ್ಲಿ ವಾಹನದ ತೂಕ ಮತ್ತು ಸಾಗಾಣೆ ಮಾಡುವ ಸರಕಿನ ತೂಕ 15000 ಕೆ.ಜಿ.ಗಳನ್ನು ಮೀರಿದ ಭಾರಿ ಸರಕು ಸಾಗಾಣೆ ವಾಹನಗಳ ಸಂಚಾರವನ್ನು ದಿನಾಂಕ: 18.3.2006 ರಿಂದ ಜಾರಿಗೆ ಬರುವಂತೆ ನಿಷೇಧಿಸಿರುತ್ತೇನೆ.

**ಹರ್ಷಗುಪ್ತಾ**
ಪಿ.ಆರ್. 890 ಜಿಲ್ಲಾ ದಂಡಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ.

## ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಶ್ರೀಮತಿ ಇಂದಿರಾಗಾಂಧಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಶಿರಾ, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:169:ಸಿಎಲ್ಎಂ:2001 ದಿನಾಂಕ:21.11.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ:ಸನಿ-33: ಎಂಕೆಟಿ:ಸ್ಥಗಿತ:2004-05 ದಿನಾಂಕ: 25.11.2004 ಮತ್ತು 3.9.2005.
3. ಈ ಕಛೇರಿ ಸಮಸಂಖ್ಯೆ ನೋಟೀಸ್ ದಿನಾಂಕ 28.2.2005.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಶ್ರೀಮತಿ ಇಂದಿರಾಗಾಂಧಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಶಿರಾ, ಶಿರಾ ತುಮಕೂರು ಈ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿ ಉಲ್ಲೇಖಿತ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ,

ಮಧುಗಿರಿ ಇವರು ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ 2000-01ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಿದ್ದು ನಂತರದ ಅವಧಿ ಇಂದ ಸಂಘವು ಸ್ಥಗಿತಗೊಂಡಿದ್ದು ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸಿರುವುದಿಲ್ಲ. ದಿನಾಂಕ: 15.9.2001 ರಂದು ಚುನಾಯಿಸಿದ ಆಡಳಿತ ಮಂಡಳಿಯ ಅವಧಿಯು 2001-02 ರಿಂದ 2005-06ನೇ ಸಾಲಿಗೆ ಇರುವುದಾಗಿ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಂಘವು ಕಳೆದ 4 ವರ್ಷಗಳಿಂದ ಸ್ಥಗಿತಗೊಂಡಿದ್ದು ಸಂಘದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗಗಳು ದೊರೆಯದೆ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಅವಧಿಯು ಪೂರ್ಣಗೊಂಡಿದ್ದು ನೂತನ ಆಡಳಿತ ಮಂಡಳಿ ರಚನೆಯಾಗದೆ ಇರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್‌ಬಿ:ಡಿಎಲ್‌ಎಸ್:41:2004-05, ದಿನಾಂಕ: 27ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72(2)(ಬಿ) ಅನ್ವಯ ಹಾಗೂ ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಆರ್. ಲಿಂಗರಾಜು, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸ್ಥಗಿತಗೊಂಡಿರುವ ಶ್ರೀಮತಿ ಇಂದಿರಾಗಾಂಧಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಶಿರಾ, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿರಾ ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಸಂಘದ ಕಾರ್ಯದರ್ಶಿ ಅಥವಾ ಪ್ರಭಾರ ಹೊಂದಿರುವ ಯಾವುದೇ ವ್ಯಕ್ತಿಯಿಂದ ಪಡೆದುಕೊಳ್ಳತಕ್ಕದ್ದು. ಸಂಘದ ಆಸ್ತಿ ಜವಾಬ್ದಾರಿಗಳನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿಗಳನ್ನು ಕಾಯಿದೆ ಮತ್ತು ನಿಯಮಾನುಸಾರ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವು ಕೂಡಲೇ ಜಾರಿಗೆ ಬರುತ್ತದೆ. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 27.4.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 893

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಲಕ್ಷ್ಮೀ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ರಂಗಪ್ಪನಪಾಳ್ಯ, ಶಿರಾ ತಾಲ್ಲೂಕು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ:ಸನಿ-33: ಎಂಕೆಟಿ:ಸ್ಥಗಿತ:2004-05 ದಿನಾಂಕ: 25.11.2004 ಮತ್ತು 3.9.2005.
3. ಈ ಕಛೇರಿ ಸಮಸಂಖ್ಯೆ ನೋಟೀಸ್ ದಿನಾಂಕ 28.2.2005.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಶ್ರೀ ಲಕ್ಷ್ಮೀ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ರಂಗಪ್ಪನಪಾಳ್ಯ, ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖಿತ (2)ರ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಂಘದ 2000-01ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.8.2001 ರಂದು ನಡೆಸಿದ್ದು ನಂತರದ ಅವಧಿಯಿಂದ ಸ್ಥಗಿತಗೊಂಡಿದ್ದು ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸಿರುವುದಿಲ್ಲ. ದಿನಾಂಕ: 30.8.2001 ರಂದು ಚುನಾಯಿಸಿದ ಆಡಳಿತ ಮಂಡಳಿಯ ಅವಧಿಯು 2001-02 ರಿಂದ 2005-06ನೇ ಸಾಲಿಗೆ ಇದ್ದುದಾಗಿ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಂಘವು ಕಳೆದ 4 ವರ್ಷಗಳಿಂದ ಸ್ಥಗಿತಗೊಂಡಿದ್ದು ಸಂಘದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗಗಳು ದೊರೆಯದೇ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿ ಅವಧಿಯು ಪೂರ್ಣಗೊಂಡಿದ್ದು ನೂತನ ಆಡಳಿತ ಮಂಡಳಿ ರಚನೆಯಾಗದೇ ಇರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ನಂ:ಡಿಆರ್‌ಬಿ:ಡಿಎಲ್‌ಎಸ್:44:2004-05, ದಿನಾಂಕ: 27ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72(2)(ಬಿ) ಅನ್ವಯ ಹಾಗೂ ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಆರ್. ಲಿಂಗರಾಜು, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸ್ಥಗಿತಗೊಂಡಿರುವ ಶ್ರೀ ಲಕ್ಷ್ಮೀ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ರಂಗಪ್ಪನಪಾಳ್ಯ ಶಿರಾ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿರಾ ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಸಂಘದ ಕಾರ್ಯದರ್ಶಿ ಅಥವಾ ಪ್ರಭಾರ ಹೊಂದಿರುವ ಯಾವುದೇ ವ್ಯಕ್ತಿಯಿಂದ ಪಡೆದುಕೊಳ್ಳತಕ್ಕದ್ದು. ಸಂಘದ ಆಸ್ತಿ ಜವಾಬ್ದಾರಿಗಳನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮೋದನೆ ಪಡೆದುಕೊಂಡು ಕಾಯಿದೆ ಮತ್ತು ನಿಯಮಾನುಸಾರ ಶೀಘ್ರವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವು ಕೂಡಲೇ ಜಾರಿಗೆ ಬರುತ್ತದೆ. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 27.4.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 894

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಎಲ್.ಎನ್.ಡಿ. (ಎನ್) ಸಿ.ಆರ್. /382/05-06, ದಿನಾಂಕ: 3ನೇ ಏಪ್ರಿಲ್ 2006**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸರ್ಕಾರಿ ಗೋಮಾಳ ಸ.ನಂ. 25ರಲ್ಲಿ ಲಕ್ಷ್ಮೀಪುರ ಗ್ರಾಮದ ಸ.ನಂ. 57ರ ಮಾಲೀಕರಾದ ಶ್ರೀ ಸುಬ್ಬರಾವ್‌ರವರು ರಸ್ತೆಗಾಗಿ ಕೋರಿರುವ ಬಗ್ಗೆ.

**ಉಲ್ಲೇಖ:** ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್.ಎನ್.ಡಿ:ಸಿ.ಆರ್:28/05-06, ದಿನಾಂಕ: 3.12.2005.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸರ್ಕಾರಿ ಗೋಮಾಳ ಸ.ನಂ. 25ರಲ್ಲಿ ಶ್ರೀ ಎ.ಸುಬ್ಬರಾವ್ ಎಂಬುವವರು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರಿಗೆ ಮನವಿ ಸಲ್ಲಿಸಿ ಲಕ್ಷ್ಮೀಪುರ ಗ್ರಾಮದ ಸ.ನಂ. 57ರಲ್ಲಿ 1.08 $^1/_2$ ಗುಂಟೆ ಜಮೀನಿನ ಮಾಲೀಕತ್ವವನ್ನು ಹೊಂದಿದ್ದು, ಸದರಿ ಜಮೀನಿಗೆ ರಸ್ತೆ ಸಂಪರ್ಕವಿಲ್ಲವಾಗಿರುವುದರಿಂದ ಸದರಿ ಜಮೀನಿಗೆ ಹೊಂದಿಕೊಂಡಂತೆ ಇರುವ ಸೋಮಶೆಟ್ಟಿಹಳ್ಳಿ ಗ್ರಾಮದ ಸ.ನಂ. 25ರ ಸರ್ಕಾರಿ ಗೋಮಾಳದಲ್ಲಿ ರಸ್ತೆ ಸಂಪರ್ಕವನ್ನು ಕೋರಿರುತ್ತಾರೆ.

ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಉಲ್ಲೇಖ ಪತ್ರದಲ್ಲಿ ವರದಿ ಸಲ್ಲಿಸಿ ಲಕ್ಷ್ಮೀಪುರ ಗ್ರಾಮದ ಸ.ನಂ. 57ರಲ್ಲಿ 1.08 $^1/_2$ ಗುಂಟೆ ಜಮೀನಿನ ಮಾಲೀಕತ್ವವನ್ನು ಶ್ರೀ ಎ. ಸುಬ್ಬರಾವ್ ಎಂಬುವವರು ಹೊಂದಿದ್ದು, ಈ ಜಮೀನಿಗೆ ದಾರಿ ಇಲ್ಲದೆ ಇರುವುದರಿಂದ ಜಮೀನಿನ ಪಕ್ಕ ಇರುವ ಸರ್ಕಾರಿ ಗೋಮಾಳ ಸ.ನಂ. 25ರಲ್ಲಿ 0.03 ಗುಂಟೆ ಅಂತರದಲ್ಲಿ ಸರ್ಕಾರಿ ರಸ್ತೆ ಹಾದುಹೋಗುತ್ತಿದ್ದು, ಸದರಿ ರಸ್ತೆಯನ್ನು ಸಾರ್ವಜನಿಕ ಉದ್ದೇಶಕ್ಕಾಗಿ (ದಾರಿಗಾಗಿ) ಕಾದಿರಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಸೋಮಶೆಟ್ಟಿಹಳ್ಳಿ ಗ್ರಾಮದ ಸರ್ಕಾರಿ ಗೋಮಾಳ ಸ.ನಂ.25ರಲ್ಲಿ 0.03 ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಲು ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

### ಆದೇಶ

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸ.ನಂ. 25ರಲ್ಲಿ 0.03 ಗುಂಟೆ ಜಮೀನನ್ನು ಇದಕ್ಕೆ ಹೊಂದಿಕೊಂಡಂತೆ ಇರುವ ಲಕ್ಷ್ಮೀಪುರ ಗ್ರಾಮದ ಸ.ನಂ. 57 ಮತ್ತು ಇತರೆ ಜಮೀನುಗಳಿಗೆ ಸಂಬಂಧಿಸಿದಂತೆ ರಸ್ತೆಗಾಗಿ ಉಪಯೋಗಿಸಲು ನಕ್ಷೆಯಲ್ಲಿರುವಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರ ಪ್ರಕಾರ ಕಾಯ್ದಿರಿಸಿದೆ.

### ಷರತ್ತುಗಳು

1. ಸದರಿ ರಸ್ತೆಯನ್ನು ಇದಕ್ಕೆ ಲಗತ್ತಾಗಿರುವ ಇತರೆ ಎಲ್ಲಾ ಜಮೀನುಗಳಿಗೆ ಉಪಯೋಗಿಸತಕ್ಕದ್ದು.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕುರವರು ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.
3. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.

ಪಿ.ಆರ್. 852 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಪ್ರಿಯದರ್ಶಿನಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಕತ್ತಲಗೆರೆ, ಚನ್ನಗಿರಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1 ಈ ಕಛೇರಿ ಆದೇಶ ಸಂಖ್ಯೆ:ಡಿಆರ್:ಡಿವಿ:ಎಲ್ ಕ್ಯೂಡಿ:ಸಿಆರ್:5:2002.03 ದಿನಾಂಕ:30.10.2002

2 ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರ ಪತ್ರ ದಿನಾಂಕ:18.3.2006.

**ಪ್ರಸ್ತಾವನೆ**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡಂತೆ ಸಹಕಾರ ಸಂಘವು ಕ್ರಮ ಸಂಖ್ಯೆ:ಸಸಂಸನಿ: 18812:216:92-93 ದಿನಾಂಕ:6.3.1993 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಇವರು ಉಲ್ಲೇಖ (2) ರ ರೀತ್ಯ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ:ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-5:2002-03, ದಿನಾಂಕ: 24ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎ:2001 ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಪ್ರಿಯದರ್ಶಿನಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಕತ್ತಲಗೆರೆ ಚನ್ನಗಿರಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:24.3.2006 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 856 ದಾವಣಗೆರೆ ಜಿಲ್ಲೆ, ದಾವಣಗೆರೆ

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:52:2005, ದಿನಾಂಕ: 21ನೇ ಏಪ್ರಿಲ್ 2006**

**ಅರ್ಜಿದಾರರು:**

1. ಮಲ್ಲಪ್ಪ ತಂದೆ ಮಡಿವಾಳಪ್ಪ ತಳವಾರ
2. ಮಲ್ಲಪ್ಪ ತಂದೆ ಮಾಲಪ್ಪ ತಳವಾರ
ವಾಸ-ಚಬನೂರ, ತಾಲ್ಲೂಕ-ಬಿ, ಬಾಗೇವಾಡಿ, ಜಿಲ್ಲೆ ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1. ಓಂಪ್ರಕಾಶ ತಂದೆ ಹನುಮಾನ ಅಗರವಾಲ ವಾಸ-ಖಮ, ತಾಲ್ಲೂಕ್-ರೋಹಾ ಜಿಲ್ಲೆ-ರಾಜಗರ ಮಹಾರಾಷ್ಟ್ರ ರಾಜ್ಯ
2. ದಿ ಬ್ರ್ಯಾಂಚ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂ: ಲಿ ಬಿಜಾಪೂರ

**ಪ್ರಕಟಣೆ**

ಶ್ರೀ:ಶ್ರೀಮತಿ ಮಲ್ಲಪ್ಪ ತಂದೆ ಮಡಿವಾಳಪ್ಪ ತಳವಾರ 2) ಮಲ್ಲಪ್ಪ ತಂದೆ ಮಾಲಪ್ಪ ತಳವಾರ ಇವರುಗಳಾದ ತಾವು ಮೃತ ಈರಪ್ಪ ತಂದೆ ಮಲ್ಲಪ್ಪ ತಳವಾರ ಇವರ ತಂದೆ ಮತ್ತು ಅಣ್ಣ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ ಮೃತ ಈರಪ್ಪ ತಂದೆ ಮಲ್ಲಪ್ಪ ತಳವಾರ ಇವರು ಒಂದನೇ ಪ್ರತಿವಾದಿಗಳಾದ ಓಂಪ್ರಕಾಶ ತಂದೆ ಹನುಮಾನ ಅಗರವಾಲ ಇವರ ಟ್ರಕ್ ಸಂಖ್ಯೆ ಎಂಟಿಒ 5650 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ , ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಅಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 860

## ತಹಶೀಲ್ದಾರವರ ಕಾರ್ಯಲಯ ಮಂಡ್ಯ ತಾಲ್ಲೂಕು, ಮಂಡ್ಯ

**ನಂ:ಟಿ.ಪಿ.ಜಿ. 139/85-86 ಮಂಡ್ಯ, ದಿನಾಂಕ:17ನೇ ಏಪ್ರಿಲ್ 2006**

**ನಮೂನೆ-38 (ನಿಯಮ 113 ಮತ್ತು 124)**

1) ಜಪ್ತಿ ಮಾಡಲ್ಪಟ್ಟ ಸ್ವತ್ತಿನ ಹರಾಜು ಬಗೆಗಿನ ಇಸ್ತಿಹಾರ ಮತ್ತು ಬರಹದ ಮೂಲಕವಾದ

**ನೋಟೀಸಿನ ನಮೂನೆ:**

ಶ್ರೀ ಆರ್.ಎಂ. ಮುಕ್ತಾರ್ ಅಹಮದ್ ಬಿನ್ ರಸೂಲ್ ಸಾಬ್ ಇವರಿಂದ ಸಲ್ಲಬೇಕಾದ 3677583 ರೂಪಾಯಿಗಳು ವಾಣಿಜ್ಯ ತೆರಿಗೆ ಬಾಕಿ ಹಣದ ಬಾಬ್ತು ಶ್ರೀ ಆರ್ ಎಂ. ಮುಕ್ತಾರ್ ಅಹಮದ್‌ರವರ ಹೆಂಡತಿಯಾದ ಶ್ರೀಮತಿ ಮಮ್ತಾಜ್ ಬೇಗಂ ಬಿನ್ ಅಬ್ದುಲ್ ಖಾಲಿಕ್ ಸಾಹೇಬ್ ಅವರಿಗೆ ಸೇರಿದ ಈ ಕೆಳಗೆ ನಮೂದಿಸಿರುವ ಸ್ವತ್ತು ಜಪ್ತಿ ಮಾಡಲ್ಪಟ್ಟಿರುವುದರಿಂದ ಮತ್ತು ಸದರಿ ಮೊಬಲಗುಗಳನ್ನು ಸದರಿ ಸ್ವತ್ತಿನ ಜಪ್ತಿಯಿಂದ ಮತ್ತು ಮಾರಾಟದಿಂದ ಉಂಟಾದ ನ್ಯಾಯ ಸಮ್ಮತ್ರದ ಸಾಮಾನ್ಯ ಖರ್ಚುಗಳ ಮತ್ತು ವೆಚ್ಚಗಳ ಸಹಿತ ಸದರಿ ಸ್ವತ್ತಿನ ಮಾರಾಟದ ಮೂಲಕ ವಸೂಲು ಮಾಡುವುದು ಅವಶ್ಯಕವಾಗಿರುವುದರಿಂದ ಈ ಮೂಲಕ ತಿಳಿಸುವುದೇನೆಂದರೆ ದಿನಾಂಕ:08.05.2006 ರಂದು ಬೆಳಿಗ್ಗೆ 11.00 ಗಂಟೆಗೆ ಮಂಡ್ಯ ತಹಶೀಲ್ದಾರರು(ಅಥವಾ ನೇಮಕ ಮಾಡಲ್ಪಟ್ಟ ಇತರ ವ್ಯಕ್ತಿಯು) ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕು ಕಸಬಾ ಹೋಬಳಿ ಮಂಡ್ಯ ಸಿಟಿ tvs ಶೋರುಮ್ 100 ಅಡಿ ರಸ್ತೆ ಮಂಡ್ಯ ಈ ಕೆಳಗೆ ನಮೂದಿಸಲ್ಪಟ್ಟ ಸ್ವತ್ತಿನಲ್ಲಿ ಸಂಬಂಧವಾದಿ ಆರ್.ಎಂ. ಮುಕ್ತಾರ್ ಅಹಮದ್ ರವರ ಹೆಂಡತಿಯಾದ ಶ್ರೀಮತಿ ಮಮ್ತಾಜ್ ಬೇಗಂ ಬಿನ್ ಅಬ್ದುಲ್ ಖಾಲಿಕ್ ಸಾಹೇಬ್ ಅವರ ಹಕ್ಕಿನ ಪಟ್ಟಿಯನ್ನು ಮತ್ತು ಪ್ರಯೋಜನಾದಾರರ ಮತ್ತು ಸದರಿ ಯವರು ತಮ್ಮ ಸ್ವಂತ ಪ್ರಯೋಜನಕ್ಕಾಗಿ ಕಾನೂನು ಅನುಸಾರವಾಗಿ ಈಗ ಸುಸಂಗತವಾಗಿ ಚಲಾಯಿಸಬಹುದಾದಂತಹ ಹಕ್ಕು ಪಟ್ಟಿ ಮತ್ತು ಪ್ರಯೋಜನಾಂಶವನ್ನು ಅಥವಾ ಅವುಗಳ ಪೈಕಿ ಯಾವುದಾದರೊಂದನ್ನು ಅಥವಾ ಅವುಗಳಿಂದಾಗಿ ಉಂಟಾಗುವ ಲಾಭಗಳನ್ನು ವಿಲೇ ಮಾಡುವ ಸಮಸ್ತ ಅಧಿಕಾರವನ್ನು ಅನಿರ್ಬಂಧವಾಗಿ ಹರಾಜಿನ ಮೂಲಕ ಹೆಚ್ಚು ಬೆಲೆಗೆ ಕೊಡುವವರಿಗೆ ಮಾರಾಟ ಮಾಡಲಾಗುವುದು.

ಸದರಿ ಸ್ವತ್ತು ಸ್ವತ್ತಿನ ವಿವರ: d4 36/2220
ಸ್ವತ್ತಿನ ಅಳತೆ :40x72 ಅಡಿ
ಚೆಕ್ಕುಬಂದಿ:1) ಉತ್ತರಕ್ಕೆ : 100 ಅಡಿ ರಸ್ತೆ
2) ದಕ್ಷಿಣಕ್ಕೆ : ಶಬನಾ ಸುಲ್ತಾಲ್ ರವರ ಮನೆ
3) ಪೂರ್ವಕ್ಕೆ : ಮುಮ್ತಾಜ್ ಮಹಮದ್ (ಚಪ್ಪಲಿ ಅಂಗಡಿ)
4) ಪಶ್ಚಿಮಕ್ಕೆ : ರಸ್ತೆ

**ಹರಾಜಿನ ಷರತ್ತುಗಳು**

1) 08.05.2006ನೇ ದಿನಾಂಕದಂದು ಹರಾಜಿಗೆ ಇಟ್ಟಿರುವ ಮನೆಯ ಮುಂಭಾಗದಲ್ಲಿ ಯಥಾಸ್ಥಿತಿಯಂತೆ ಹರಾಜು ನಡೆಸಲಾಗುವುದು ಅವಶ್ಯಕವಾದರೆ ಉದ್ಘೋಷಣೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಿರ ಸ್ವತ್ತು ಮಾರಾಟವಾಗುವವರೆಗೆ (ರಜಾ ದಿನಗಳು ಹೊರತು) ದಿನಾಂಕವನ್ನು ಹರಾಜನ್ನು ಮುಂದುವರಿಸುವ ಅಧಿಕಾರವನ್ನು ತಹಶೀಲ್ದಾರವರು ಹೊಂದಿರುತ್ತಾರೆ.

2) ಯಾವ ಹಣದ ವಸೂಲಿಯ ಸಲುವಾಗಿ ಸ್ಥಿರ ಸ್ವತ್ತನ್ನು ಮಾರಾಟ ಮಾಡಲಾಗುತ್ತಿದೆಯೇ ಅದರ ಹಣವನ್ನು ಪಡೆಯಲು ಹಕ್ಕುಳ್ಳ ವ್ಯಕ್ತಿ ತಹಶೀಲ್ದಾರವರ ಅನುಮತಿ ಇಲ್ಲದೆ ಹರಾಜಿನಲ್ಲಿ ಸವಾಲು ಮಾಡಲು ಅಥವಾ ಸ್ವತ್ತಿನಲ್ಲಿ ಖರೀದಿಮಾಡಲು ಅವಕಾಶವಾಗುವುದಿಲ್ಲ.

3) ಯಾವ ಹಣದ ವಸೂಲಿಗಾಗಿ ಸ್ಥಿರ ಸ್ವತ್ತನ್ನು ಹರಾಜು ಮಾಡಲಾಗುತ್ತಿದೆಯೋ ಅಂತಹ ಹಕ್ಕು ವ್ಯಕ್ತಿಯು ಜಿಲ್ಲಾಧಿಕಾರಿಯವರ ಅನುಮತಿ ಇಲ್ಲದೆ ತಾನಾಗಲೀ ಅಥವಾ ಇತರ ವ್ಯಕ್ತಿಯ ಮೂಲಕವಾಗಲೀ ಖರೀದಿ ಮಾಡಿದರೆ ಮಾರಾಟದಿಂದ ಯಾವ ಹಿತಾ ಸಕ್ತಿಗೆ ಧಕ್ಕೆ ಉಂಟಾಗಿದೆಯೋ ಆ ಬಾಕಿದಾರರನ್ನು ಅಥವಾ ಯಾವುದೇ ಇತರ ವ್ಯಕ್ತಿಯ ಅರ್ಜಿಯ ಮೇಲೆ ತಹಶೀಲ್ದಾರರು ಸೂಕ್ತವೆಂದು ಮನಗಂಡ ಪಕ್ಷದಲ್ಲಿ ಆದೇಶದ ಮೂಲಕ ಈ ಹರಾಜನ್ನು ತಳ್ಳಿ ಹಾಕಬಹುದು ಆ ರೀತಿ ತಳ್ಳಿ ಹಾಕುವುದರಿಂದ ಉಂಟಾಗಬಹುದಾದ ನಷ್ಟವನ್ನು ಮತ್ತು ಅಂತಹ ಅರ್ಜಿಯ ಹಾಗೂ ಅದರ ಖರ್ಚುಗಳನ್ನು ಯಾರಿಗಾಗಿ ಹರಾಜನ್ನು ನಡೆಸಲಾಗಿದೆಯೋ ಅಂತಹ ವ್ಯಕ್ತಿಯ ಸಂದಾಯ ಮಾಡಬೇಕಾಗಿರುತ್ತದೆ.

4) ಹರಾಜನ್ನು ನಡೆಸಲು ನೇಮಕ ಹೊಂದಿರುವ ಯಾವುದೇ ಅಧಿಕಾರಿಯು ಮತ್ತು ಅಂತಹ ಅಧಿಕಾರಿಯು ಅತ್ಯಂತ ಹೆಚ್ಚಿನ ಸವಾಲನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ವಿವೇಚನೆಯನ್ನು ಹೊಂದಿರುತ್ತಾರೆ.

5) ಹರಾಜಿನ ದಿನಾಂಕದಂದು ಯಾವ ಸವಾಲು ಇಲ್ಲದಿದ್ದರೆ ಸ್ವತ್ತನ್ನು ಸರ್ಕಾರವು ಖರೀದಿ ಮಾಡಬಹುದಾಗಿರುತ್ತದೆ ಮತ್ತು ಹರಾಜಿನಲ್ಲಿ ಭಾಗವಹಿಸುವವರು ಚುನಾವಣ ಆಯೋಗದಿಂದ ವಿತರಿಸಿರುವ ಗುರುತಿನ ಚೀಟಿ ಹಾಜರುಪಡಿಸುವುದು.

6) ಹರಾಜಿನಲ್ಲಿ ಸವಾಲು ಮಾಡುವ ಇಚ್ಛೆಯುಳ್ಳ ಪ್ರತಿಯೊಬ್ಬ ಸವಾಲುದಾರರು ಮುಂಗಡ ಹರಾಜಿನ ವೇಳೆಗೆ ಮೊದಲು ರೂ. 10000 ರೂಗಳನ್ನು ಠೇವಣಿ ಕಟ್ಟಿ ಹರಾಜಿನಲ್ಲಿ ಭಾಗವಹಿಸಬೇಕಾಗಿರುತ್ತದೆ ಮತ್ತು ಅಂತಿಮವಾಗಿ ಸವಾಲುದಾರರು ಹರಾಜು ಆದ ಕೂಡಲೇ ಆ ಸವಾಲಿನ ಮೇರೆಗೆ ನಿರ್ಧರಿಸಿದ ಶೇಕಡ 25 ರಷ್ಟು ಹಣ ಹರಾಜು ಮುಗಿದ ಕೂಡಲೇ ಸ್ಥಳದಲ್ಲಿ ಪಾವತಿ ಮಾಡಿ ಉಳಿಕೆ ಹಣವನ್ನು ಪೂರ್ಣಗೊಂಡ ಹದಿನೈದು ದಿವಸದೊಳಗಾಗಿ ಪಾವತಿ ಮಾಡತಕ್ಕದ್ದು ತಪ್ಪಿದಲ್ಲಿ ಆಸ್ತಿಯನ್ನು ಪುನಃ ಅದೇ ದಿನ ಬಹಿರಂಗವಾಗಿ ಹರಾಜು ಮಾಡಲಾಗುವುದು ಮತ್ತು ಹಣ ಪಾವತಿ ಮಾಡಲು ತಪ್ಪಿದ ಸವಾಲುದಾರರ ಠೇವಣಿ ಹಣವಾದ ರೂ. 10000 ರೂಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಸಂದಾಯ ಮಾಡಲು ತಪ್ಪಿದ ಕಾರಣದಿಂದ ಮತ್ತೆ ಮರು ಹರಾಜಿನಲ್ಲಿ ಉಂಟಾಗಬಹುದಾದ ನಷ್ಟ ಮತ್ತು ಹರಾಜಿನಲ್ಲಿ ತಗಲುವ ವೆಚ್ಚವನ್ನು ಖರೀದಿ ದಾರರಿಂದ ವಸೂಲು ಮಾಡಲ್ಪಡುತ್ತದೆ.

ಮಾರಾಟವು ಮಂಡ್ಯ ಜಿಲ್ಲಾಧಿಕಾರಿಯವರ ಸ್ಥಿರಿಕರಣಕ್ಕೆ ಒಳಪಟ್ಟಿರುತ್ತೆ ಮಾರಾಟವನ್ನು ಸ್ಥೀರಿಕರಿಸಿದ ತರುವಾಯ ಯಶಸ್ವಿ ಸವಾಲುದಾರರ ಹೆಸರಿನಲ್ಲಿ ಖರೀದಿಸಲು ಪ್ರಮಾಣ ಪತ್ರ ಕೊಡಲಾಗುವುದು ಹಾಗೂ ನೊಂದಣಿ ಅಧಿಕಾರಿಗಳಲ್ಲಿ ಅಖೈರು ಬಿಡ್ಡುದಾರರು ನೊಂದಣಿ ಫೀ ಸಂದಾಯ ಮಾಡಿ ನೊಂದಣಿ ಮಾಡಿಸಿಕೊಳ್ಳುವುದು.

ತಹಶೀಲ್ದಾರ್
ಮಂಡ್ಯ ತಾಲ್ಲೂಕು

ಪಿ.ಆರ್. 861

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಆಕುಕ 157 ಎಂಎಸ್‌ಎಸ್ 2006, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸಹ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2006 ರಲ್ಲಿದ್ದಂತೆ ತಯಾರಿಸಲು ಸರ್ಕಾರ ತೀರ್ಮಾನಿಸಿದೆ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿ) 1957 ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ಅನುಬಂಧದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾಧಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನು ಒಳಗೊಂಡ ಆಕ್ಷೇಪಣೆಗಳನ್ನು ದ್ವಿ ಪ್ರತಿಗಳಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಲುಪುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಮೂಲಕ ಸಲ್ಲಿಸತಕ್ಕದ್ದು. ಒಂದು ಮುಂಗಡ ಪ್ರತಿಯನ್ನು ಕೆಳಗೆ ಸಹಿ ಮಾಡಿರುವವರಿಗೆ ನೇರವಾಗಿ ಕಳುಹಿಸಿ ಕೊಡತಕ್ಕದ್ದು, ಅಲ್ಲದೆ, ಈ ಜೇಷ್ಠತಾ ಪಟ್ಟಿಯಲ್ಲಿ ಕಾಣಿಸಿರುವ ಹೆಸರು, ಜನ್ಮ ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡುಬಂದು ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ ನಿರ್ದಿಷ್ಟ ದಾಖಲೆಗಳೊಡನೆ ಅವುಗಳನ್ನು ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು ನಿರ್ದಿಷ್ಟ ಕಾರಣಗಳು, ದಾಖಲೆಗಳು, ಆಧಾರಗಳು ಇಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿ ತಲುಪಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ತೆಗ್ಗಿನಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅನುಬಂಧ

ದಿನಾಂಕ:1.1.2006 ರಲ್ಲಿದ್ದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಹ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಅಧಿಸೂಚನೆ ಸಂಖ್ಯೆ: ಆಕುಕ 157 ಎಂಎಸ್‌ಎಸ್ 2006 ದಿನಾಂಕ: 18.04.2006

| ಕ್ರ. ಸಂ. | ವೈದ್ಯಾಧಿಕಾರಿಯ ಹೆಸರು | ನೇರ ನೇಮಕಾತಿ ಅಥವಾ ಮುಂಬಡ್ತಿ ಅಥವಾ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1. | ಡಾ: ಡಿ.ಆರ್. ಹಿರೇಗೌಡರ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 04.02.1948 | 22.03.1974 | 20.08.2004 | 20.08.2004 |
| 2. | ಡಾ: ಜಾಬೀನ್ ಚಂದ್ರಮೋಹನ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 30.08.1948 | 05.03.1974 | 03.03.2005 | 03.03.2005 |

| ಕ್ರ. ಸಂ. | ವೈದ್ಯಾಧಿಕಾರಿಯ ಹೆಸರು | ನೇರ ನೇಮಕಾತಿ ಅಥವಾ ಮುಂಬಡ್ತಿ ಅಥವಾ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 3. | ಡಾ: ಎ. ಕಲ್ಯಾಣಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 17.03.1948 | 17.04.1974 | 03.03.2005 | 03.03.2005 |
| 4. | ಡಾ: ಬಿ.ಎಸ್. ಪ್ರೇಮಲೀಲಾ | ಮುಂಬಡ್ತಿ | ಅನ್ವಯಿಸುವುದಿಲ್ಲ | 24.04.1950 | 19.08.1974 | 26.04.2005 | 26.04.2005 |

ಎಸ್.ಕೆ. ತೆಗ್ಗಿನಮನಿ
ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 871

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರವರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ,

**ಸಂಖ್ಯೆ: ಕಾಅಗ:ಕಾನಪ: F 34/06/66, ದಿನಾಂಕ: 31ನೇ ಮಾರ್ಚ್ 2006**

**ಅರ್ಜಿದಾರರು:**

1. ಶಾಂತವ್ವ ಕೋಂ ರಾಮಪ್ಪ ಕೊಳ್ಳಿ R/o ರೋಣ ಜಿಲ್ಲಾ ಗದಗ
2. ಮಂಜುನಾಥ 10 ವರ್ಷ
3. ನೇತ್ರಾವತಿ 7 ವರ್ಷ
4. ಮಣಿಕಂಠ 5 ವರ್ಷ ತಂದೆ ರಾಮಪ್ಪ ಕೊಳ್ಳಿ

**ವಿರುದ್ಧ**

**ಪ್ರತಿವಾದಿಗಳು:**

1. ಮ್ಯಾನೇಜಿಂಗ್ ಡೈರಕ್ಟರ್ ವಿಜಯಾನಂದ ರೋಡ್ ಲೈನ್ಸ್ ಲಿ. ವಿಜಯ ಕರ್ನಾಟಕ ಗಿರಿರಾಜ NK ದಿ ಸರ್ಕಿಟ್ ಹೌಸ್ ರಸ್ತೆ ಹುಬ್ಬಳ್ಳಿ.
2. ಡಿವಿಜನಲ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂ.ಲಿ. ಸಾವಿತ್ರಿ ಸದನ ಕಿಟಲ್ ಕಾಲೇಜ್ ಎದುರು, ಧಾರವಾಡ.

### ಪ್ರಕಟಣೆ

ಅರ್ಜಿದಾರರಾದ ಶ್ರೀ:ಶ್ರೀಮತಿ ಶಾಂತವ್ವ ಕೋಂ ರಾಮಪ್ಪ ಕೊಳ್ಳಿ ಹಾಗೂ ಮಕ್ಕಳು ಇವರು ತಾವು ಮೃತ ರಾಮಪ್ಪಕೊಳ್ಳಿ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಾಮಪ್ಪ ಕೊಳ್ಳಿ ಇವರು ಒಂದನೇ ಪ್ರತಿವಾದಿಗಳಾದ ವಿಜಯಾನಂದ ರೋಡ್ ಲೈನ್ಸ್ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ,
ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 872

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರವರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ,

**ಸಂಖ್ಯೆ: ಕಾಅಗ:ಕಾನಪ: F-36/06/60, ದಿನಾಂಕ: 31ನೇ ಮಾರ್ಚ್ 2006**

**ಅರ್ಜಿದಾರರು:**

1. ಶ್ರೀಮತಿ ಈರಮ್ಮ ಶೇಖರಯ್ಯ ವಸ್ತ್ರದ R/o ಬೆಳವಣಕಿ ತಾಲ್ಲೂಕು:ರೋಣ
2. ಶೇಖರಯ್ಯ ಶಿವಬಸಯ್ಯ ವಸ್ತ್ರದ R/o ಬೆಳವಣಕಿ ತಾ:ರೋಣ ಜಿ:ಗದಗ

**ವಿರುದ್ಧ**

**ಪ್ರತಿವಾದಿಗಳು:**

1. ಮ್ಯಾನೇಜಿಂಗ್ ಡೈರಕ್ಟರ್ ವಿಜಯಾನಂದ ರೊಡ್ ಲೈನ್ಸ್. ಗಿರಿರಾಜ ಅನೆಕ್ಸ್ ಹುಬ್ಬಳ್ಳಿ
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಸೂರೆನ್ಸ್ ಕಂ.ಲಿ. ಕಿಟಲ್ ಕಾಲೇಜ್ ಎದುರು, ಧಾರವಾಡ.

### ಪ್ರಕಟಣೆ

ಅರ್ಜಿದಾರರಾದ ಶ್ರೀ:ಶ್ರೀಮತಿ ಈರಮ್ಮ ಶೇಖರಯ್ಯ ವಸ್ತ್ರದ 2) ಶೇಖರಯ್ಯ ಶಿವಬಸಯ್ಯ ವಸ್ತ್ರದ ಇವರು ತಾವು ಮೃತ ಶಿವಬಸಯ್ಯ ವಸ್ತ್ರದ ಇವರ ತಂದೆ ಮತ್ತು ತಾಯಿ ಎಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿವಬಸಯ್ಯ ವಸ್ತ್ರದ ಇವರು ಒಂದನೇ ಪ್ರತಿವಾದಿಗಳಾದ ವಿಜಯಾನಂದ ರೋಡ ಲೈನ್ಸ್ ಹುಬ್ಬಳ್ಳಿ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಭಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ನಾಮ ಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ,
ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 873

